ಕುಂ. ಬಾ. ಸದಾಶಿವಪ್ಪ *

# ಹರಪನಹಳ್ಳಿ ಪಾಳೇಗಾರರು ಸ್ಥಾಪಿಸಿದ ಕೆಲವು ದೇವಾಲಯಗಳ ಬಗ್ಗೆ ಐತಿಹ್ಯಗಳು

ಸುಮಾರು ಕ್ರಿ.ಶ. ೧೫೬೫ರಲ್ಲಿ ಹರಪನಹಳ್ಳಿ ಪಾಳೇಗಾರಿಕೆಯನ್ನು ಸ್ಥಾಪಿಸಿದ ದಾದೇನಾಯಕ ಒಮ್ಮೆ ಬೇಟೆಯಾಡುತ್ತಿದ್ದಾಗ ನಾಯಿಯನ್ನು ಹೆದರಿಸಿದ ಒಂದು ಮೊಲಕ್ಕೆ ಬೆನ್ನು ಹತ್ತಲು ಅದು ಹುತ್ತದಲ್ಲಿ ಅಡಗಿತು. ಆಗ ಹುತ್ತವನ್ನು ಬಗೆಯಲು ಅಲ್ಲಿ ಒಂದು ಮೂರ್ತಿ ಶಿಲ್ಪ ಗೋಚರಿಸಿತು. ಅದೇ ಹರಪನಹಳ್ಳಿಯ ಈಗಿನ ಕೋಟೆ ಹನುಮಂತದೇವರು.

ಹರಪನಹಳ್ಳಿಗೆ ಸುಮಾರು ೨೦ ಕಿಲೋಮೀಟರ್ ದೂರವಿರುವ ಮೈದೂರು ಗ್ರಾಮದಲ್ಲಿ ಎತ್ತು ಎಮ್ಮೆ ಮುಂತಾದ ಪಶುಗಳಿಗೆ ಖಾಯಿಲೆ ಉಂಟಾದರೆ ಪಶುವನ್ನು ಗೌಡರ ಎತ್ತು ಕಟ್ಟುವ ಗೋದಲಿಗೆ ಕಟ್ಟುತ್ತಿದ್ದರು. ಹೀಗೆ ಎರಡು ದಿನಗಳ ಕಾಲ ಕಟ್ಟಿದಲ್ಲಿ ಅವುಗಳ ಖಾಯಿಲೆ ನಿವಾರಣೆಯಾಗುವುದು. ಇದು ಜನರಾಡುವ ಮಾತುಗಳಿಂದ ನಾಯಕರಿಗೆ ಗೊತ್ತಾಯಿತು. ದಾದೇನಾಯಕ ಮೈದೂರಿಗೆ ತೆರಳಿ ಗೌಡರ ಗೋದಲಿಯನ್ನು ಅಗೆಸಿದನು. ಗೋದಲಿಯ ಅಡಿಯಲ್ಲಿ ಒಂದು ಕಲ್ಲಿನ ಮೂರ್ತಿ ದೊರೆಯಿತು. ಆ ಮೂರ್ತಿಯನ್ನು ಹರಪನಹಳ್ಳಿಗೆ ಸಾಗಿಸಿ ಈಗಿನ ಹಳೇ ಬಸ್ ನಿಲ್ದಾಣದಲ್ಲಿ ಒಂದು ದೇವಸ್ಥಾನ ನಿರ್ಮಿಸಿ ಅದರಲ್ಲಿ ಮೂರ್ತಿ ಸ್ಥಾಪಿಸಲು ಅರಸ ಯೋಚಿಸಿದ್ದನು. ಆದರೆ ಹರಪನಹಳ್ಳಿಗೆ ಆ ಮೂರ್ತಿಯನ್ನು ಸಾಗಿಸುವಾಗ ಹರಪನಹಳ್ಳಿಗೆ ಪೂರ್ವ ದಿಕ್ಕಿನಲ್ಲಿ ಬಂಡಿ ಅಚ್ಚು ಮುರಿದು ಬಿದ್ದಿತು. ಅಂದು ರಾತ್ರಿ ಅರಸನ ಸ್ವಪ್ನದಲ್ಲಿ ದೇವರು ಅಲ್ಲಿಯೇ ನೆಲೆಸುವುದಾಗಿ ಸೂಚಿಸಿದಂತಾಗಲು ಅಲ್ಲಿಯೇ ಒಂದು ದೇವಾಲಯವನ್ನು ನಿರ್ಮಿಸಲಾಯಿತು. ಈ ದೇವಾಲಯ ನಿರ್ಮಿಸಿದ ಅಲ್ಪಕಾಲದಲ್ಲಿ ಲಕ್ಷ್ಮೀದೇವಿಯ ಮೂರ್ತಿಯು ಅದೇ ಮೈದೂರು ಗ್ರಾಮದ ಒಂದು ಮನೆಯಲ್ಲಿ ದೊರೆಯಿತು. ಆ ಮೂರ್ತಿಯನ್ನು ಪಡೆದು ಅದನ್ನು ಶ್ರೀ ವೆಂಕಟೇಶ್ವರ ದೇವರ ಪಕ್ಕದಲ್ಲಿಯೇ ಸ್ಥಾಪಿಸಿದರು. ಆಗಿನ ಕಾಲದಲ್ಲಿ ಈ ದೇವಾಲಯದ ಪಕ್ಕದಲ್ಲಿ ಅರ್ಚಕರು ಮಾತ್ರ ವಾಸಿಸಿದ್ದರು. ಕೆಲಕಾಲದ ಮೇಲೆ ಕೆಲವು ಮನೆಗಳು ಹೊಸದಾಗಿ ನಿರ್ಮಾಣವಾಗಿ ಈಗ ಸುಮಾರು ಎರಡು ನೂರು ಮನೆಗಳ ಒಂದು ಗ್ರಾಮ ಇದಕ್ಕೆ ದೇವರ ತಿಮ್ಮಲಾಪುರವೆಂದು ಕರೆಯುವರು. ಪ್ರತಿ ವರ್ಷವೂ ರಥೋತ್ಸವದೊಂದಿಗೆ ಜಾತ್ರೆ ಜರುಗುವುದು.

ಹರಪನಹಳ್ಳಿ ಈಗಿನ ಹಳೇ ಬಸ್‌ನಿಲ್ದಾಣದಲ್ಲಿ ಶ್ರೀ ವೆಂಕಟೇಶ್ವರನಿಗಾಗಿ ನಿರ್ಮಿಸಿದ ಕಟ್ಟಡ ದೇವರಿಲ್ಲದ ಖಾಲಿ ಕಟ್ಟಡ ವಾಗಿತ್ತು. ಆಗಿನ ಕಾಲದಲ್ಲಿ ಕುರುಸಾಣಿ ಕಲ್ಲುಗಳನ್ನು ವ್ಯಾಪಾರಿಗಳು ಬೇರೆ ಕಡೆಯಿಂದ ಹರಪನಹಳ್ಳಿ ಮಾರ್ಗವಾಗಿ ಹರಿಹರಕ್ಕೆ ಕತ್ತೆಗಳಿಗೆ ಸಬರ ಹಾಕಿ ಸಾಗಿಸುತ್ತಿದ್ದರು. ಹೀಗಿರುವಾಗ ಒಂದು ಬಾರಿ ಹರಪನಹಳ್ಳಿಯ ಹಳೇ ಬಸ್ ನಿಲ್ದಾಣವಿರುವ ಜಾಗದಲ್ಲಿ ರಾತ್ರಿ ಒಂದು ತಂಡದವರು ಉಳಿದು ಮುಂಜಾವದಲ್ಲಿ ಸಬರದ ಕತ್ತೆಗಳನ್ನು ಸಾಗಿಸಿದರು. ಆಗ ಒಂದು ಕತ್ತೆಯ ಸಬರದಿಂದ ಒಂದು ಕಲ್ಲು ಜಾರಿ ಅಲ್ಲಿ ಬಿದ್ದಿತು. ಬಿದ್ದ ಕಲ್ಲಿನ ಮೇಲೆ ಶ್ರೀ ವೀರಭದ್ರದೇವರ ಮೂರ್ತಿಯ ರೇಖಾಚಿತ್ರ ಕಾಣುತ್ತಿತ್ತು. ದಿವಾನ ಹಂಪರ ಸಪ್ಪನ ಸ್ವಪ್ನದಲ್ಲಿ ಶ್ರೀ ವೀರಭದ್ರದೇವರ ಸೂಚನೆ ಅಗಲು ಅರಸನು ಆ ಮೂರ್ತಿಯನ್ನು ದೇವರಿಲ್ಲದ ಕಟ್ಟಡದಲ್ಲಿ ಪ್ರತಿಷ್ಠಾಪನೆ ಮಾಡಿಸಿದನು. ಪ್ರತಿ ವರ್ಷ ಗೌರಿ ಹುಣ್ಣಿಮೆಯಲ್ಲಿ

* ಶಂಕರಮಠದ ಹತ್ತಿರ, ಹೊಸಪೇಟೆರಸ್ತೆ, ಬಳ್ಳಾರಿ ಜಿಲ್ಲೆ, ಹರಪನಹಳ್ಳಿ – ೫೮೩ ೧೩೧

ರಥೋತ್ಸವ, ಅಗ್ನಿಗಳಿಂದ ಈ ದೇವರ ಜಾತ್ರೆ ಜರುಗುವುದು. ಅರಸರು ನೇಮಿಸಿದ ಕೆಲವು ಮಠಗಳ ಸ್ವಾಮಿಗಳು ಈಗಲೂ ಒಂದೊಂದು ಕಾರ್ಯದಲ್ಲಿ ಪಾಲುಗೊಳ್ಳುವರು. ೯.೨.೧೯೭೩ರಂದು ಒಂದು ಹೊಸ ಮೂರ್ತಿಯನ್ನು ಶಿಲ್ಪಿಗಳಿಂದ ಮಾಡಿಸಿ ಮೊದಲ ಮೂರ್ತಿಯನ್ನು ಅದರ ತಳದಲ್ಲಿ ಹಾಕಿರುವರು. ಸರಕಾರಿ ಲೆಕ್ಕಪತ್ರಗಳಲ್ಲಿ ಈ ದೇವರನ್ನು ಸಬರದ ಶ್ರೀ ವೀರಭದ್ರನೆಂದು ಉಲ್ಲೇಖಿಸಿದೆ. ಈ ದೇವಾಲಯದ ಸುತ್ತಮುತ್ತಣ ಪ್ರದೇಶಕ್ಕೂ ಸಬರದ ಕೇರಿ ಎಂದು ಹೆಸರು ಉಂಟಾಯಿತು. ಈಗ ಜನರ ಆಡು ಮಾತುಗಳಲ್ಲಿ ''ಸಬಕಾರ ಕೇರಿ'' ಎಂದಾಗಿದೆ.

ಹರಪನಹಳ್ಳಿ ಪಾಳೇಗಾರರು ಪ್ರತಿ ವರ್ಷ ಮಣ್ಣು ಮೈಲಾರ ಜಾತ್ರೆಗೆ ಹೋಗುತ್ತಿದ್ದರು. ಒಂದು ಸಾರಿ ಮೈಲಾರದ ದೇವರ ಧರ್ಮದರ್ಶಿಗಳಾದ ಒಡೆಯರು ಅರಸರನ್ನು ಸರಿಯಾಗಿ ಉಪಚರಿಸಲಿಲ್ಲ. ಅದಕ್ಕೆ ಕುಪಿತರಾದ ಅರಸ ದಾದೇನಾಯಕರು ಹರಪನಹಳ್ಳಿಗೆ ಪಶ್ಚಿಮಕ್ಕೆ ಒಂದು ಕಿಲೋಮೀಟರ್ ದೂರದಲ್ಲಿ ಒಂದು ದೇವಾಲಯವನ್ನು ನಿರ್ಮಿಸಿ ಶ್ರೀ ಮೈಲಾರಲಿಂಗಸ್ವಾಮಿಯ ಮೂರ್ತಿಯನ್ನು ಸ್ಥಾಪಿಸಿದರು. ಪ್ರತಿ ವರ್ಷ ಭಾರತ ಹುಣ್ಣಿಮೆಯಲ್ಲಿ ಗೊರವನು ಬಿಲ್ಲು ಏರಿ ಕಾರ್ಣೀಕ ಹೇಳುವುದರೊಂದಿಗೆ ವಿಜೃಂಭಣೆಯಿಂದ ಜಾತ್ರೆ ಜರುಗುವುದು.

ಉಚ್ಚಂಗಮ್ಮ ಎಂಬ ಹೆಣ್ಣು ದೇವತೆಯು ಈ ಅರಸರ ಮನೆ ದೇವರು. ದಾದೇನಾಯಕನ ಮಡದಿ ಹೊನ್ನಾನಾಗತಿ ಕೋಟೆಯ ಮೇಲಿನಿಂದ ಕೆಳಗೆ ಉರುಳಿ ನಿಧನಳಾಗಿದ್ದಳು. ಆ ದುಃಖ ವನ್ನು ಮರೆಯಲು ನಾಯಕ ಉಚ್ಚಂಗಿದುರ್ಗಕ್ಕೆ ಕೆಲಕಾಲ ಹೋಗಲಿಲ್ಲ. ಹರಪನಹಳ್ಳಿಗೆ ವಾಯುವ್ಯ ದಿಕ್ಕಿನಲ್ಲಿ ಒಂದು ಪರ್ವತವಿದೆ. ಆ ಪರ್ವತದ ಮೇಲೆ ಒಂದು ಚಿಕ್ಕ ದೇವಾಲಯವನ್ನು ನಿರ್ಮಿಸಿ ಶ್ರೀ ಉಚ್ಚಂಗೆಮ್ಮ ಮೂರ್ತಿ ಯನ್ನು ಅರಸ ಸ್ಥಾಪಿಸಿದನು. ಇದರಿಂದ ಹರಪನಹಳ್ಳಿ ಮತ್ತು ಅದರ ಪರಿಸರದ ಭಕ್ತರಿಗೆ ದೂರ ಪ್ರಯಾಣ ಮಾಡುವ ಅಗತ್ಯವಿಲ್ಲವಾಯಿತು.

**ಈ ಐತಿಹ್ಯಗಳಿಂದ ಗೊತ್ತಾಗುವ ಅಂಶಗಳು ಇವು :**

೧) ೧೩ನೇ ಶತಮಾನದಲ್ಲಿ ದಕ್ಷಿಣ ಭಾರತದಲ್ಲಿ ದೆಹಲಿ ಸುಲ್ತಾನರು ದಾಳಿ ಮಾಡಿದರು. ಆಗ ಅವರ ದಾಳಿಯನ್ನು ಎದುರಿಸಲಾಗದ ಹಿಂದೂಗಳು ತಮ್ಮ ಶಿಲಾಮೂರ್ತಿಗಳನ್ನು ನೆಲದಲ್ಲಿ ಮುಚ್ಚಿದರು.

೨) ಪ್ರಾಚೀನರು ತಮ್ಮ ಸಾಕುಪ್ರಾಣಿಗಳಾದ ಎತ್ತು, ಎಮ್ಮೆ, ಆಡು, ಕುರಿಗಳಿಗೆ ರೋಗ ತಗುಲಿದರೆ ದೇವರಿಗೆ ಮೊರೆ ಹೋಗುತ್ತಿದ್ದರು.

೩) ಬ್ರಾಹ್ಮಣರು ಶ್ರೀ ವೀರಭದ್ರ ದೇವರನ್ನು ಪೂಜಿಸುವುದು ಅಪರೂಪ. ಇಲ್ಲಿ ದಿವಾನ ಹಂಪರಸಪ್ಪ ಬ್ರಾಹ್ಮಣ. ಅವನು ಶ್ರೀ ವೀರಭದ್ರದೇವರ ಪ್ರತಿಷ್ಠಾಪನೆಗೆ ಕಾರಣನಾದನು. ಈಗಲೂ ಅವರ ವಂಶದ ಬ್ರಾಹ್ಮಣರು ಶ್ರೀ ವೀರಭದ್ರ ದೇವರ ಭಕ್ತರು.

○

**ಆಧಾರಗಳು**

೧) ದೇವಸ್ಥಾನಗಳ ಚಿತ್ರಗಳು

೨) ಪ್ರಾಚೀನರ ಹೇಳಿಕೆಗಳು

೩) ತಿಮ್ಮಲಾಪುರದಯ್ಯನ ಕತೆ- ಚಿ : ಗೋವಿಂದಾಚಾರ್ಯರು

೪) ದಾದೇ ನಾಯಕ ಮತ್ತು ಪುತ್ರ ರಂಗಾನಾಯಕರ ಮೂರ್ತಿಗಳು ಶ್ರೀ ವೆಂಕಟೇಶ್ವರ ದೇವಾಲಯದಲ್ಲಿವೆ..

೫) ಈಗಲೂ ಹರಪನಹಳ್ಳಿ ಬೇಡರ ಕೇರಿ ಜನರು ತಾವು ಮಾಡಿದ ಭೂಮಿ ಲಾವಣಿ ಹಣವನ್ನು ದಾದಣ್ಣನ ಮತ್ತು ರಂಗಣ್ಣನ ತೇರಿಗೆ ಕೊಡುವುದಾಗಿ ಕರಾರು ಬರೆಸುವರು.